# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 239 |
| ಸದಸ್ಯರ ಹೆಸರು | : | ಶ್ರೀ ಕೆ.ಸಿ.ಕೊಂಡಯ್ಯ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 13.09.2021 |
| ಉತ್ತರಿಸುವ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

<table>
<tr><th>ಕ್ರಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯದಲ್ಲಿ ಶಾಲೆಯಿಂದ ಹೊರಗುಳಿದ ಮಕ್ಕಳ ಪ್ರಮಾಣ ಹೆಚ್ಚಾಗಿರುವ ಬಗ್ಗೆ ಸರ್ಕಾರಕ್ಕೆ ಮಾಹಿತಿ ಇದೆಯೇ;</td><td>ಹೌದು.<br>2020-21ನೇ ಸಾಲಿನಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮತ್ತು ನಗರಾಭಿವೃದ್ಧಿ ಇಲಾಖೆಗಳ ವತಿಯಿಂದ ನಡೆಸಲಾಗಿರುವ ಮನೆ ಮನೆ ಸಮೀಕ್ಷೆ(Household Survey) ಪ್ರಕಾರ ಶಾಲೆಯಿಂದ ಹೊರಗುಳಿದಿರುವ ಮಕ್ಕಳ ವಿವರ ಮುಂದಿನಂತಿದೆ.
<table>
<tr><th>ಕ್ರಮ ಸಂಖ್ಯೆ</th><th>ವಿವರ</th><th>ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ</th><th>ಷರಾ</th></tr>
<tr><td>1</td><td>ಗ್ರಾಮೀಣ ಪ್ರದೇಶ</td><td>43,601</td><td>ಚಿಕ್ಕಬಳ್ಳಾಪುರ ಜಿಲ್ಲೆಯ ಸಮೀಕ್ಷಾ ಮಾಹಿತಿ ಪ್ರಸ್ತುತ ಲಭ್ಯವಿಲ್ಲ.</td></tr>
<tr><td>2</td><td>ನಗರ ಪ್ರದೇಶ(ಬಿ.ಬಿ.ಎಂ.ಪಿ ಹೊರತುಪಡಿಸಿ)</td><td>14,076</td><td>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಸಮೀಕ್ಷಾ ಕಾರ್ಯ ಪ್ರಗತಿಯಲ್ಲಿದೆ.</td></tr>
<tr><td colspan="2">ಒಟ್ಟು</td><td>57677</td><td></td></tr>
</table>
ಮಕ್ಕಳು ಶಾಲೆಯಿಂದ ಹೊರಗುಳಿಯದಂತೆ ತಪ್ಪಿಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗಿದೆ.</td></tr>
<tr><td>ಆ)</td><td>ಹಾಗಿದ್ದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ಆರ್ಥಿಕ ದುರ್ಬಲ ವರ್ಗದ ವಿದ್ಯಾರ್ಥಿಗಳಿಗೆ ಸಾಕಷ್ಟು ಡಿಜಿಟಲ್ ಮೂಲ ಸೌಕರ್ಯಗಳ ಜೊತೆಗೆ ಡಿಜಿಟಲ್ ಮೂಲಸೌಕರ್ಯ</td><td>1. ರಾಜ್ಯದ 4627 ಸರ್ಕಾರಿ ಪ್ರೌಢ ಶಾಲೆಗಳಲ್ಲಿ 3218 ಶಾಲೆಗಳಿಗೆ ಕಂಪ್ಯೂಟರ್ ಲ್ಯಾಬ್, ಕಂಪ್ಯೂಟರ್, ಲ್ಯಾಪ್ ಟಾಪ್ ಮತ್ತು ಪ್ರೊಜೆಕ್ಟರ್‌ಗಳನ್ನು ಸರಬರಾಜು ಮಾಡಲಾಗಿದೆ.<br>2. 2020-21ನೇ ಸಾಲಿನಲ್ಲಿ ಕೋವಿಡ್ -19 ಸಾಂಕ್ರಾಮಿಕ ರೋಗದ ಪ್ರಯುಕ್ತ ಶಾಲೆಗಳು ಪ್ರಾರಂಭ ಮಾಡಲು ಸಾಧ್ಯವಾಗಿರುವುದಿಲ್ಲ. ಆದ ಕಾರಣ 1ರಿಂದ 10ನೇ ತರಗತಿ ವಿದ್ಯಾರ್ಥಿಗಳಿಗೆ ರೇಡಿಯೋ ಹಾಗೂ ದೂರದರ್ಶನ ಚಂದನ</td></tr>
</table>

| | | |
|---|---|---|
| | ಹೊಂದಿದ ಗ್ರಾಮೀಣ ಶಾಲೆಗಳನ್ನು ಸುಜ್ಜುಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ವಾಹಿನಿಯಲ್ಲಿ ಸಂವೇದ ಕಾರ್ಯಕ್ರಮದ ಮೂಲಕ ಎಲ್ಲಾ ವಿಷಯದ ಪಾಠಗಳನ್ನು ನುರಿತ ಶಿಕ್ಷಕರಿಂದ ಪ್ರಸಾರ ಮಾಡಲಾಗಿದೆ. ಇದೇ ಕಾರ್ಯಕ್ರಮವನ್ನು ಯು-ಟ್ಯೂಬ್ ಚಾನಲ್-ಮಕ್ಕಳವಾಣಿ, ಡಿ.ಎಸ್.ಇ.ಆರ್.ಟಿ.ಯ ಜ್ಞಾನದೀಪ ಮತ್ತು ದೀಕ್ಷಾ ಪೋರ್ಟಲ್‌ನಲ್ಲಿ ಅಪ್ಲೋಡ್ ಮಾಡುವ ಮೂಲಕ ವಿದ್ಯಾರ್ಥಿಗಳು ಪಾಠಗಳನ್ನು ಹಲವಾರು ಬಾರಿ ವೀಕ್ಷಿಸಲು ಅವಕಾಶ ಮಾಡಿಕೊಡಲಾಗಿದೆ.<br>3. ಆಕಾಶವಾಣಿ ರೇಡಿಯೋ ಕಾರ್ಯಕ್ರಮದಲ್ಲಿ ಬೆಳಿಗ್ಗೆ 10.00 ರಿಂದ 10.15ರವರಗೆ 1 ಮತ್ತು 2ನೇ ತರಗತಿ ವಿದ್ಯಾರ್ಥಿಗಳಿಗೆ ಮತ್ತು 10.15 ರಿಂದ 10.30ರವರಗೆ 3 ಮತ್ತು 4ನೇ ತರಗತಿ ವಿದ್ಯಾರ್ಥಿಗಳಿಗೆ ಡಿ.ಎಸ್.ಇ.ಆರ್.ಟಿ.ರವರು ತಯಾರಿಸಿದ ಆಡಿಯೋ ಪಾಠಗಳನ್ನು ಪ್ರಸಾರ ಮಾಡಲಾಗಿದೆ. ಇದೇ ಪಾಠಗಳನ್ನು ರಾಜ್ಯದ ಎಫ್.ಎಂ. ರೇನ್‌ಬೋ ರೇಡಿಯೋ ಚಾನಲ್ ನಲ್ಲಿ ಮರು ಪ್ರಸಾರ ಮಾಡಲಾಗಿದೆ.<br>4. ದೀಕ್ಷಾ ಪೋರ್ಟಲ್‌ನಲ್ಲಿ 1 ರಿಂದ 10ನೇ ತರಗತಿಯ ಎಲ್ಲಾ ವಿಷಯಗಳನ್ನು ಕನ್ನಡ ಮತ್ತು ಇಂಗ್ಲೀಷ್ ಮಾಧ್ಯಮದಲ್ಲಿ ಸರಿಸುಮಾರು 22,000 ಸಾವಿರಕ್ಕೂ ಹೆಚ್ಚು ಪಠ್ಯ ಪುಸ್ತಕವನ್ನು ಇ-ಕಂಟೆಂಟ್ ಮೂಲಕ ಅಪ್ಲೋಡ್ ಮಾಡಲಾಗಿದೆ.<br>5. ದೀಕ್ಷಾ ಪೋರ್ಟಲ್ ನಲ್ಲಿ 1 ರಿಂದ 12ನೇ ತರಗತಿಯ ಪಠ್ಯ ಪುಸ್ತಕದ ಇ-ಕಂಟೆಂಟ್‌ಗಳಿಗೆ QR code ತಯಾರಿಸಿ ಹೆಚ್ಚುವರಿ ಮಾಹಿತಿಗಳನ್ನು ಸಂಗ್ರಹಿಸಿ ಅವುಗಳನ್ನು ಬಲವರ್ಧನೆ (energized) ಮಾಡಿ ಮಕ್ಕಳ ಕಲಿಕೆಗೆ ಅನುಕೂಲ ಮಾಡಿಕೊಡಲಾಗಿದೆ. ವಿದ್ಯಾರ್ಥಿಗಳಲ್ಲಿ ಲಭ್ಯವಿರುವ ಮೊಬೈಲ್ ಮೂಲಕ ದೀಕ್ಷಾ ಪೋರ್ಟಲ್‌ನ್ನು ಡೌನ್ ಲೋಡ್ ಮಾಡಿ ತಮ್ಮ ತರಗತಿಯ ಎಲ್ಲಾ ವಿಷಯದ ಪಠ್ಯ ಪುಸ್ತಕವನ್ನು ಹಲವಾರು ಬಾರಿ ಓದಲು ಅವಕಾಶ ಕಲ್ಪಿಸಿ ಕೊಡಲಾಗಿದೆ.<br>6. ಪಠ್ಯ ಪುಸ್ತಕವನ್ನು ಇ-ಕಂಟೆಂಟ್ ಮೂಲಕ ಬಲವರ್ಧನೆ (energized) ಮಾಡಿ ಈಗಾಗಲೇ ಸರಬರಾಜು ಮಾಡಲಾದ ಎಲ್ಲಾ ಕಂಪ್ಯೂಟರ್, ಲ್ಯಾಪ್ ಟಾಪ್ ಮತ್ತು ಪ್ರೊಜೆಕ್ಟರ್‌ಗಳಲ್ಲಿ ಅಪ್ಲೋಡ್ ಮಾಡಲಾಗಿದೆ. ಇದರಿಂದ ಬೋಧನಾ-ಕಲಿಕಾ ಪ್ರಕ್ರಿಯೆಯಲ್ಲಿ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಅನುಕೂಲವಾಗಿದೆ. |

ಇಪಿ 136 ಎಂ.ಹೆಚ್.ಟಿ 2021

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು